## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | | 214 |
| ಮಾನ್ಯ ಸದಸ್ಯರ ಹೆಸರು | | ಶ್ರೀ ಆರ್. ಪ್ರಸನ್ನ ಕುಮಾರ್ |
| ಉತ್ತರಿಸುವ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | | 12-07-2018 |
| ಪ್ರಶ್ನೆ | | ಉತ್ತರ |
| (ಅ) | ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ಏಕರೂಪ ಪಠ್ಯಕ್ರಮ ತರುವ ಉದ್ದೇಶವಿದೆಯೇ; (ವಿವರ ನೀಡುವುದು) | ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಮಾರ್ಗಸೂಚಿಗಳನುಸಾರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರಲ್ಲಿ ಕಲ್ಪಿಸಿದ ಅವಕಾಶಗಳನ್ವಯ ಪ್ರತಿಯೊಂದು ವಿಷಯಕ್ಕೂ ಒಂದು ಅಧ್ಯಯನ ಮಂಡಳಿಯನ್ನು ರಚಿಸಿ ಪಠ್ಯಕ್ರಮಗಳ ವಿನಿಯಮಾವಳಿಯನ್ನು ಸಿದ್ಧಪಡಿಸಲಾಗುತ್ತದೆ. ಸದರಿ ವಿನಿಯಮಾವಳಿಗೆ ವಿಶ್ವವಿದ್ಯಾಲಯಗಳ ವಿದ್ಯಾವಿಷಯಕ ಪರಿಷತ್ತುಗಳ ಅಂಗೀಕಾರ ಪಡೆದು ತದನಂತರ ಘನತೆವೆತ್ತ ರಾಜ್ಯಪಾಲರ ಅನುಮೋದನೆಯೊಂದಿಗೆ ಪಠ್ಯಕ್ರಮಗಳನ್ನು ಅಳವಡಿಸಿಕೊಳ್ಳಲಾಗುತ್ತದೆ. ಪ್ರಸ್ತುತ ಏಕರೂಪ ಪಠ್ಯಕ್ರಮವನ್ನು ಜಾರಿಗೆ ತರುವ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
| (ಆ) | ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯ ವಿವರವನ್ನು ಒದಗಿಸುವುದು; | ವಿವರಗಳನ್ನು ಅನುಬಂಧ-ಅ ರಲ್ಲಿ ಒದಗಿಸಿದೆ. |
| ಇ) | ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಥಿಗಳು ಪಿಹೆಚ್‌ಡಿ ಮಾಡಲು ನಿಗದಿಪಡಿಸಿದ ವಿದ್ಯಾರ್ಹತೆ ಹಾಗೂ ಮಾನದಂಡಗಳೇನು? | ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಮಾರ್ಗಸೂಚಿಗಳನುಸಾರ ಆಯಾ ವಿಶ್ವವಿದ್ಯಾಲಯಗಳ ವಿದ್ಯಾವಿಷಯಕ ಪರಿಷತ್ತುಗಳಲ್ಲಿ ವಿನಿಯಮ ರಚಿಸಿ, ಘನತೆವೆತ್ತ ರಾಜ್ಯಪಾಲರ ಅನುಮೋದನೆ ಪಡೆದ ಪಿಹೆಚ್‌ಡಿ ವಿನಿಯಮಗಳನುಸಾರ ವಿವಿಧ ವಿಷಯಗಳಲ್ಲಿನ ಪಿಹೆಚ್‌ಡಿ ಪದವಿಗೆ ಆಯ್ಕೆ ಪ್ರಕ್ರಿಯೆಯನ್ನು ನಡೆಸಲಾಗುತ್ತದೆ.<br><br>ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಮಾನ್ಯತೆ ಇರುವ ವಿಶ್ವವಿದ್ಯಾಲಯಗಳಿಂದ ಪಡೆದ ಸ್ನಾತಕೋತ್ತರ ಪದವಿಯಲ್ಲಿ ಶೇಕಡಾ 55ಕ್ಕಿಂತ ಹೆಚ್ಚಿನ ಅಂಕಗಳನ್ನು ಪಡೆದವರು ವಿಶ್ವವಿದ್ಯಾಲಯಗಳ ಪಿ.ಹೆಚ್‌ಡಿ ಪದವಿಯ ಪ್ರವೇಶ ಪರೀಕ್ಷೆಗೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ, ವರ್ಗ-1ರ ಹಾಗೂ ವಿಕಲಚೇತನ ಅಭ್ಯರ್ಥಿಗಳು ಶೇಕಡಾ 50ರಷ್ಟು ಅಂಕಗಳನ್ನು ಪಡೆದಿರಬೇಕು.<br><br>ಮುಂದುವರೆದು, ಎನ್‌ಇಟಿ ಮತ್ತು ಎಸ್‌ಎಲ್‌ಇಟಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವವರು/ವಿದೇಶ ವಿದ್ಯಾರ್ಥಿಗಳಿಗೆ ಪಿಹೆಚ್‌ಡಿ ಅರ್ಹತಾ ಪರೀಕ್ಷೆಯಿಂದ ವಿನಾಯಿತಿ ಇರುತ್ತದೆ.<br><br>ಪಿಹೆಚ್‌ಡಿ ಪದವಿಯ ಪ್ರವೇಶ ಪರೀಕ್ಷೆಯ ಅಂಕ ಹಾಗೂ ಸ್ನಾತಕೋತ್ತರ ಪದವಿಗಳ ಅಂಕ ಮತ್ತು ಸಂದರ್ಶನದಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಅರ್ಹತೆ ಮತ್ತು ಮೀಸಲಾತಿಯನ್ನು ಆಧರಿಸಿ ಖಾಲಿ ಇರುವ ಪಿಹೆಚ್‌ಡಿ ಸೀಟುಗಳಿಗೆ ಪ್ರವೇಶ ನೀಡಲಾಗುವುದು. |

ಸಂಖ್ಯೆ: ಇಡಿ 238 ಯುಎನ್‌ಇ 2018

(ಜಿ.ಟಿ. ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

# ಅನುಬಂಧ- ಅ

## ರಾಜ್ಯದ ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ವಿಶ್ವವಿದ್ಯಾಲಯಗಳ ಬೋಧಕ ಸಿಬ್ಬಂದಿಗಳ ವಿವರ

(ದಿನಾಂಕ: 01-07-2018ರಲ್ಲಿದ್ದಂತೆ)

| ಕ್ರ ಸಂ. | ವಿಶ್ವವಿದ್ಯಾಲಯದ ಹೆಸರು | ಬೋಧಕ ಹುದ್ದೆಗಳ ವಿವರ | | | ಬೋಧಕೇತರ ಹುದ್ದೆಗಳ ವಿವರ | | |
|---|---|---|---|---|---|---|---|
| | | ಒಟ್ಟು ಮಂಜೂರಾದ ಹುದ್ದೆಗಳ ಸಂಖ್ಯೆ | ಕರ್ತವ್ಯ ನಿರ್ವಹಿಸುತ್ತಿರುವವರ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಒಟ್ಟು ಮಂಜೂರಾದ ಹುದ್ದೆಗಳ ಸಂಖ್ಯೆ | ಕರ್ತವ್ಯ ನಿರ್ವಹಿಸುತ್ತಿರುವವರ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
| 1 | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | | | | | | |
| 2 | ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯ, ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು | 634 | 305 | 329 | 1178 | 599 | 579 |
| 3 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ, ತಮಕ, ಕೋಲಾರ ಜಿಲ್ಲೆ | | | | | | |
| 4 | ಮೈಸೂರು ವಿಶ್ವವಿದ್ಯಾಲಯ, ಮೈಸೂರು | 664 | 354 | 310 | 1184 | 716 | 468 |
| 5 | ಕನ್ನಡ ವಿಶ್ವವಿದ್ಯಾಲಯ, ಹಂಪಿ | 73 | 61 | 12 | 194 | 177 | 17 |
| 6 | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | 578 | 294 | 284 | 1357 | 484 | 873 |
| 7 | ಗುಲ್ಬರ್ಗ ವಿಶ್ವವಿದ್ಯಾಲಯ, ಕಲಬುರಗಿ | 248 | 74 | 174 | 706 | 277 | 429 |
| 8 | ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು | 273 | 203 | 70 | 547 | 312 | 235 |
| 9 | ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ | 224 | 192 | 32 | 590 | 337 | 353 |
| 10 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು | 137 | 81 | 56 | 574 | 215 | 359 |
| 11 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ | 228 | 148 | 80 | 425 | 318 | 107 |
| 12 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ | 133 | | | | | |
| 13 | ತುಮಕೂರು ವಿಶ್ವವಿದ್ಯಾಲಯ, ತುಮಕೂರು | 217 | 139 | 78 | 214 | 48 | 166 |
| 14 | ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ | 147 | 16 | 131 | 179 | 34 | 145 |
| 15 | ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ, ಮೈಸೂರು | 15 | 00 | 15 | 19 | 00 | 19 |
| 16 | ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು | 71 | 38 | 33 | 62 | 34 | 28 |
| 17 | ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ | 120 | 105 | 15 | 272 | 139 | 133 |
| 18 | ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ | 151 | 52 | 99 | 137 | 41 | 96 |
| 19 | ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಹಾವೇರಿ ಜಿಲ್ಲೆ | 21 | 00 | 21 | 29 | 00 | 29 |
| | ಒಟ್ಟು | 3934 | 2135 | 1799 | 7838 | 3736 | 4202 |